# ಭಾಷಾ ಕಲಿಕೆಯಲ್ಲಿ ಬೊಂಬೆಯಾಟದ ಬಳಕೆ

Use of Puppetry in Teaching Language

ಪ್ರೇಮಾ ಡೇನಿಯಲ್

ಮಗುವಿನ ಕಲಿಕೆಯ ಪ್ರಕ್ರಿಯೆಯಲ್ಲಿ ಭಾಷೆ ಅತ್ಯಂತ ಪ್ರಮುಖ ಸಾಧನವಾಗಿದೆ. ಮಕ್ಕಳಿಗೆ ಬಹಳ ಚಿಕ್ಕ ವಯಸ್ಸಿನಲ್ಲೇ ತಮ್ಮ ಮಾತೃಭಾಷೆಯಲ್ಲದ ಇತರ ಭಾಷೆಗಳನ್ನು ಪರಿಚಯಿಸಲಾಗುತ್ತದೆ. ಬಹುತೇಕ ಶಾಲೆಗಳು ಇಂಗ್ಲೀಷನ್ನು ಬೋಧನೆಯ ಮಾಧ್ಯಮವನ್ನಾಗಿ ಆಯ್ಕೆ ಮಾಡಿಕೊಂಡಿವೆ. ಏಕೆಂದರೆ ಇಂಗ್ಲೀಷ್ ಕಲಿಕೆ ಯಶಸ್ಸಿನ ಮೊದಲ ಮೆಟ್ಟಿಲು ಎಂಬ ಭಾವನೆ ಇರುವುದರಿಂದ ಮಕ್ಕಳು ಸಾಧ್ಯವಾದಷ್ಟು ಬೇಗನೆ ಇಂಗ್ಲೀಷನ್ನು ಪರಿಚಯಿಸಿಕೊಳ್ಳಬೇಕೆಂದು ತಾಯ್ತಂದೆಯರು (ಮತ್ತು ಸಾರ್ವಜನಿಕರು) ಬಯಸುತ್ತಾರೆ.

ಮಕ್ಕಳಿಗೆ ಇಂಗ್ಲೀಷ್ ಗೊತ್ತಿಲ್ಲದಿದ್ದರೆ ಬೋಧಕರು ಅವರನ್ನು ಮೂರ್ಖರೆಂದು ತೀರ್ಮಾನಿಸುತ್ತಾರೆ, ಅವರ ಐಕ್ಯೂ (ಬುದ್ಧಿಯ ಪ್ರಮಾಣ) ಕಡಿಮೆ ಮಟ್ಟದ್ದೆಂಬ ಭಾವ ತಳೆಯುತ್ತಾರೆ. ಇಂಗ್ಲೀಷ್ ಕಲಿಸುವ ತವಕದಲ್ಲಿ ಬೋಧಕರು ಕಠೋರವಾಗಿ ನುಡಿಯುವರು, ಮಕ್ಕಳ ಕೈಲಿ ಐದೈದು ಆರಾರು ಸಲ ಬರೆದದ್ದನ್ನೇ ಮತ್ತೆ ಮತ್ತೆ ಬರೆಯಿಸುವರು. ಮಕ್ಕಳೊಂದಿಗೆ ಮಾತುಕತೆ ನಡೆಸದೇ ಒಂದೇ ಸಮನೆ ಅವರಿಗೆ ಹೀಗೆ ಮಾಡು, ಹಾಗೆ ಮಾಡು ಎಂದು ಸೂಚಿಸುವರು. ಹೀಗೆಲ್ಲ ಮಾಡುವುದರಿಂದ ಅವರು ಇಂಗ್ಲೀಷ್ ಕಲಿತುಬಿಡುವರೆಂದು ತಿಳಿಯುವರು.

ಭಾಷಾನುಭವ ವಿಧಾನ ಯಾವುದೇ ಭಾಷೆಯನ್ನು ಕಲಿಯಲು ಇರುವ ಅತ್ಯಂತ ಮುಖ್ಯವಾದ ವಿಧಾನವಾಗಿದೆ. ಈ ವಿಧಾನವು ಈ ಕೆಳಗಿನ ಅಂಶಗಳನ್ನು ಒಳಗೊಂಡಿರುತ್ತದೆ:

೧. ಚಲನಾ ನಿಯಂತ್ರಣ

೨. ದೃಶ್ಯ ವ್ಯತ್ಯಾಸ

೩. ಶ್ರವಣ ವ್ಯತ್ಯಾಸ.

ಈ ಮೂರು ಅಂಶಗಳು ಮುಖ್ಯ ಭಾಷಾಕೌಶಲ್ಯಗಳಾದ ಆಲಿಸುವಿಕೆ, ನುಡಿಯುವಿಕೆ, ಓದುವಿಕೆ-ಬರೆಯುವಿಕೆಗಳನ್ನು ಅಭಿವೃದ್ಧಿಪಡಿಸಿಕೊಳ್ಳಲು ನೆರವಾಗುತ್ತವೆ. ಭಾಷಾ ಬೋಧನೆಯ ಈ ವಿಧಾನದಲ್ಲಿ ಬೊಂಬೆಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಬಹುದು.

**ಏಕೆ ಬೊಂಬೆಗಳು?**

ಓರ್ವ ಬೋಧಕ ಏನೆಲ್ಲ ಮಾಡಬಲ್ಲರೋ, ಅದನ್ನೆಲ್ಲ ಒಂದು ಸೂತ್ರದ ಬೊಂಬೆಯೂ ಮಾಡಬಲ್ಲದು. ಸೂತ್ರದ ಬೊಂಬೆಗಳು ಕುಣಿಯಬಲ್ಲವು, ನುಡಿಯಬಲ್ಲವು, ಹಾಡಬಲ್ಲವು, ಓದಬಲ್ಲವು, ಬರೆಯಬಲ್ಲವು, ಬೋಧಿಸಲೂ ಬಲ್ಲವು. ಬೊಂಬೆಗಳಿಂದ ತರಗತಿ ಜೀವಕಳೆಯಿಂದ ತುಂಬುತ್ತದೆ.

ತತ್ಪರಿಣಾಮವಾಗಿ ಮಕ್ಕಳೂ ಸಹ:

- ಇತರರೊಂದಿಗೆ ಸಂವಹನ ಮಾಡುತ್ತಾರೆ, ಸಕ್ರಿಯವಾಗಿ ಆಲಿಸುವ ಕೌಶಲ್ಯವನ್ನು ಅಭ್ಯಾಸ ಮಾಡುತ್ತಾರೆ, ಭಾಷೆಯನ್ನು ಒಂದು ಸಾಮಾಜಿಕ ಉಪಕರಣದಂತೆ ಬಳಸುತ್ತಾರೆ, ಒಳ್ಳೆಯ ಸಾಹಿತ್ಯವನ್ನು ಶ್ಲಾಘಿಸಿ ಆಸ್ವಾದಿಸುತ್ತಾರೆ, ವ್ಯಾಕರಣಬದ್ಧವಾದ ಸರಿಯಾದ ಭಾಷೆಯನ್ನು ಬಳಸುತ್ತಾರೆ, ಸಹಜವಾಗಿ, ಸರಾಗವಾಗಿ ಅಭಿವ್ಯಕ್ತಿಸುತ್ತಾರೆ, ಅರಚಾಡದೇ ಸ್ಪಷ್ಟವಾಗಿ ನುಡಿಯುತ್ತಾರೆ.
- ಬೊಂಬೆಯೊಂದಿಗೆ ಲೇಬಲ್‌ಗಳು ಹಾಗೂ ಸಂಕೇತಗಳನ್ನು ಬಳಸಿದಾಗ ಲಿಖಿತ ಭಾಷೆಯನ್ನು ಕಲಿಯುತ್ತಾರೆ.
- ದೃಶ್ಯ, ಶ್ರವಣ ಹಾಗೂ ಕೈನೆಸ್ಥೆಟಿಕ್* (kinesthetic) ಮಾರ್ಗಗಳ ಸಂಯೋಜಿತ ಮಾರ್ಗವನ್ನು ಶೋಧಿಸಿಕೊಳ್ಳುತ್ತಾರೆ.

  ***ಕೈನೆಸ್ಥೆಟಿಕ್** ಕಲಿಕೆ: ಮಕ್ಕಳು ತಮ್ಮ ದೈಹಿಕ ಚಟುವಟಿಕೆಗಳ ಮೂಲಕ ಕಲಿಯುವ ವಿಧಾನ, ಅವರು ದೇಹದ ಅಂಗಾಂಗಗಳು ಮತ್ತು ಇಂದ್ರಿಯಗಳ ಮೂಲಕ ಅನುಭವ ಪಡೆದುಕೊಳ್ಳುವ ಕಲಿಕೆ.

ಮಕ್ಕಳು ಬೊಂಬೆಗಳಿಗೆ ಸ್ಪಂದಿಸುವ ಕ್ರಮ ಅತ್ಯಾಕರ್ಷಕವಾದುದು: ನಂಬಿಕೆಯನ್ನು ಬದಿಗಿರಿಸಿ, ಬೊಂಬೆ ನಿಜವಾದ ವಸ್ತುವೆಂಬ ಭಾವನೆಯಿಂದ ಅದಕ್ಕೆ ಪ್ರತಿಕ್ರಿಯಿಸುತ್ತಾರೆ. ಅದೆಷ್ಟೋ ಬೋಧಕರು 'ಇಂಗ್ಲೀಷ್ ಒಂದನ್ನೇ ಮಾತನಾಡುವ' ಬೊಂಬೆಯನ್ನು ಹೊಂದಿದ್ದು ಇಂಗ್ಲೀಷ್ ಮಾತನಾಡುವಂತೆ ಮಕ್ಕಳನ್ನು ಪ್ರೋತ್ಸಾಹಿಸಲು ಅದನ್ನು ಪರಿಣಾಮಕಾರಿಯಾಗಿ ಬಳಸುತ್ತಾರೆ. ಮಕ್ಕಳು ಬೊಂಬೆಯ ಹೆಸರು, ವಯಸ್ಸು, ಇಷ್ಟಾನಿಷ್ಟಗಳನ್ನು ತಿಳಿಯುವ ಪ್ರಯತ್ನ ಮಾಡುವ ಕಾರಣ ಅದು ಸಂವಹನವನ್ನೂ ಪ್ರವರ್ಧಿಸುತ್ತದೆ.

ಮಕ್ಕಳು ಮಾತನಾಡುವ ಹಿಂಜರಿಕೆಯಿಂದ ಹೊರಬಂದು ಒಮ್ಮೊಮ್ಮೆ ಬೊಂಬೆಯನ್ನು ತಮ್ಮ ಮುಖವಾಣಿಯಂತೆ ಬಳಸುವುದೂ ಉಂಟು. ನೀವೇ ಸ್ವತಃ ಮಾಡಿರಿ ಎಂದು ಸೂಚಿಸಿದಾಗ ಮಾಡದಿರುವುದನ್ನು ಬೊಂಬೆಯಿದ್ದಾಗ ಮಾಡುವುದುಂಟು. ಮಕ್ಕಳು ಹೊಸದಾದ ಮತ್ತು ವಿವಿಧ ಬಗೆಯ ಪಾತ್ರಗಳನ್ನು ನಿರ್ವಹಿಸುವಂತೆ ಬೊಂಬೆಗಳು ಮಾಡಬಲ್ಲವು. ಬೊಂಬೆ ತರಗತಿಗೆ ವೈವಿಧ್ಯ ನೀಡುತ್ತದೆ, ತರಗತಿಗೆ ಒಂದು ಮಾಂತ್ರಿಕ ಸ್ಪರ್ಶ ನೀಡುತ್ತದೆ. ಸಹಕಾರಭಾವವಿಲ್ಲದ, ತರಗತಿಯಲ್ಲಿ ವಿಶೇಷ ಆಸಕ್ತಿ ತೋರಿಸದ ವಿದ್ಯಾರ್ಥಿಗಳು ಬೊಂಬೆಗಳೊಂದಿಗೆ ಬಹಳ ಸಕಾರಾತ್ಮಕವಾಗಿ ಸ್ಪಂದಿಸುವುದನ್ನು ನೀವು ಕಾಣಬಹುದು.

ಸಾಮಾನ್ಯ ಮಾತುಕತೆಗೆ, ಸಂಭಾಷಣೆಗೆ, ಬೋಧನೆಗೆ ಅಥವಾ ಹೊಸ ಭಾಷೆ ಕಲಿಸುವುದಕ್ಕೆ ಸೂತ್ರದ ಬೊಂಬೆಗಳನ್ನು ಬಳಸಬಹುದು. ಹಾಡುಗಳು, ಉಚ್ಚಾರಣೆಗಳು, ಸಂವಾದಗಳು, ಸುಧಾರಣೆಗಳು ಹಾಗೂ ಆಟಗಳಲ್ಲೂ ಸಹ ಬೊಂಬೆಗಳನ್ನು ಬಳಸಬಹುದಾಗಿದೆ.

ಬೊಂಬೆಗಳನ್ನು ಒಂದು ಪುಟ್ಟ ಜಾಗದಲ್ಲೂ ಸಹ ಬಳಸಬಹುದು. ವೇದಿಕೆಯ ಮೇಲೆ ತೋರಿಸುವುದು ಸಾಮಾನ್ಯವಾಗಿ ಕಷ್ಟಕರ ಎನಿಸುವ ದೊಡ್ಡ ಗಾತ್ರದ ಬೊಂಬೆಗಳನ್ನು, ಉದಾಹರಣೆಗೆ, ದೆವ್ವ, ರಾಕ್ಷಸ, ಡೈನೋಸಾರ್ ಬೊಂಬೆಗಳನ್ನು, ಆಸಕ್ತಿದಾಯಕವಾಗಿ ತೋರಿಸಲು ಸಾಧ್ಯ. ನೀವು ಮಕ್ಕಳಿಗೆ ಹೇಳುವ ಹಾಗೂ ಮಕ್ಕಳು ತಾವೇ ಸ್ವತಃ ಸೃಷ್ಟಿಸಿಕೊಳ್ಳುವ ಕತೆಗಳನ್ನು ನಿರೂಪಿಸಲು ಅವುಗಳನ್ನು ಬಳಸಬಹುದು.

ಸೂತ್ರದ ಬೊಂಬೆಗಳನ್ನು ಬಳಸಲು ಕೆಲವು ಕೌಶಲ್ಯಗಳು ಬೇಕಾಗುತ್ತವೆ, ವಿವಿಧ ಪಾತ್ರಗಳಿಗೆ ವಿವಿಧ ಧ್ವನಿಗಳನ್ನು ಬಳಸಬೇಕಾಗುತ್ತದೆ. ಬೊಂಬೆಯಾಡಿಸುವವನು, ಬೊಂಬೆಗಳನ್ನು ಆಡಿಸುವ ಕೌಶಲ್ಯವನ್ನು ಕಲಿತಿರಬೇಕಾದ ಅಗತ್ಯವಿದೆ. ಬೊಂಬೆಯ ತುಟಿಗಳ ಚಲನೆಗೆ ಅನುಸಾರವಾಗಿ ಅವರು ತಮ್ಮ ಮಾತನ್ನು ಹೊಂದಿಸಿಕೊಳ್ಳಬೇಕಾಗುತ್ತದೆ. ಒಮ್ಮೊಮ್ಮೆ ಬೊಂಬೆ ಸುಮ್ಮನಿರಬೇಕಾಗುತ್ತದೆ ಅಥವಾ ಅತ್ತಿತ್ತ ಚಲಿಸಬೇಕಾಗುತ್ತದೆ. ಜಾಗರೂಕತೆಯಿಂದ ವೇದಿಕೆಗೆ ಆಗಮಿಸಿ ಬಳಿಕ ನಿರ್ಗಮಿಸಬೇಕಾಗುತ್ತದೆ. ಮಕ್ಕಳು ಪ್ರದರ್ಶನ ಆಸಕ್ತಿಕರವಾಗುವಂತೆ, ಪ್ರೇಕ್ಷಕರಿಗೆ ಅರ್ಥವಾಗುವಂತೆ, ಬೊಂಬೆಯನ್ನು ನಿಯಂತ್ರಿಸುವುದನ್ನು ಕಲಿಯಬೇಕಾಗುತ್ತದೆ.

**ಬೊಂಬೆ ಮಾಡುವ ವಿಧಾನ**

ಬೊಂಬೆಯನ್ನು ಸಿದ್ಧಪಡಿಸುವಾಗ ಮಕ್ಕಳು ಸೂಚನೆಗಳನ್ನು ಪಾಲಿಸಬೇಕಾಗುತ್ತದೆ. ಅಂಗಡಿಯಲ್ಲಿ ಸಿಗುವ ಬೊಂಬೆಗಿಂತ ಮಕ್ಕಳು/ಬೋಧಕರು ತಾವೇ ಕೈಯಾರೆ ಮಾಡಿದ ಬೊಂಬೆಯಿಂದ ಎರಡು ಪ್ರಯೋಜನಗಳಿವೆ. ಮೊದಲನೆಯದು, ಬೊಂಬೆ ಮಾಡುವಾಗ ಸಿಗುವ ಆನಂದ. ಎರಡನೆಯದಾಗಿ, ಆ ಪಾತ್ರಗಳನ್ನು ಅಭಿವೃದ್ಧಿಪಡಿಸುವಾಗ ಎದುರಾಗುವ ಸವಾಲು. ಬಹುತೇಕ ಸಂದರ್ಭಗಳಲ್ಲಿ ಮಕ್ಕಳಿಗೆ ಮನುಷ್ಯ ಬೊಂಬೆ ಮಾಡುವುದಕ್ಕಿಂತ ಪ್ರಾಣಿಗಳ ಬೊಂಬೆ ಮಾಡುವುದು ಸುಲಭವಾದುದಾಗಿದೆ.

**ಬೊಂಬೆಯನ್ನು ತರಗತಿಯಲ್ಲಿ ಪರಿಣಾಮಕಾರಿಯಾಗಿ ಬಳಸುವುದು**

- ಒಂದು ಪರಿಕಲ್ಪನೆ ಅಥವಾ ಒಂದು ಚಟುವಟಿಕೆಯನ್ನು ಪರಿಚಯಿಸಲು ಅಥವಾ ಕಲಿಸಲು ಬೊಂಬೆಯನ್ನು ಬಳಸಿರಿ. ವಿದ್ಯಾರ್ಥಿಗಳೊಂದಿಗೆ ಮಾತನಾಡುವಾಗ ಸುಮ್ಮನೆ ಬೊಂಬೆಯನ್ನು ಕೈಯಲ್ಲಿ ಹಿಡಿದುಕೊಂಡಿರಿ. ಮಾತನಾಡುವಾಗ ಬೊಂಬೆಯತ್ತ ನೋಡುತ್ತಿರಿ. ಬೊಂಬೆ ಪ್ರತಿಕ್ರಿಯಿಸಬೇಕಾದಾಗ, ಅದು ಮಕ್ಕಳೊಂದಿಗೆ ನೇರವಾಗಿ ಮಾತನಾಡುತ್ತಿದೆ ಎಂದು ಭಾಸವಾಗುವಂತೆ ಅದರ ಬಾಯನ್ನು ಅಥವಾ ಶರೀರವನ್ನು ಚಲಿಸಬೇಕಾಗುತ್ತದೆ. ನೀವು ಅಥವಾ ಮತ್ತೊಂದು ಬೊಂಬೆ ಮಾತನಾಡುತ್ತಿರುವಾಗ ಈ ಬೊಂಬೆ ಅಲ್ಲಾಡದೇ ಸುಮ್ಮನೆ ನಿಂತಿರಬೇಕಾಗುತ್ತದೆ ಎಂಬುದನ್ನು ನೆನಪಿಡಿ.
- ಕೆಲವು ಬೊಂಬೆಗಳನ್ನು ಸೂಚಿತ ಪಾಠಗಳಲ್ಲಿ ಬೋಧಕರಷ್ಟೇ ಉಪಯೋಗಿಸಬೇಕಾಗುತ್ತದೆ. ಇವು ಸಾಮಾನ್ಯವಾಗಿ ದೊಡ್ಡದಾಗಿರುತ್ತವೆ, ವಿಶೇಷ ಬೊಂಬೆಗಳಾಗಿರುತ್ತವೆ. ಅವು ತರಗತಿಯ ಮ್ಯಾಸ್ಕಟ್* (*ಶುಭ ತರುವ ವಸ್ತು ಅಥವಾ ವ್ಯಕ್ತಿ) ಸಹ ಆಗಬಹುದು. ಅವು ನಿಮ್ಮ ದಿನವನ್ನು ಬೆಳಗಿಸಲು ಬರಬಹುದು ಅಥವಾ ತರಗತಿಯ ಗದ್ದಲಕ್ಕೆ ಹೆದರಿ ಮಾಯವಾಗಲೂ ಬಹುದು.
- ತರಗತಿಯ ಒಳಗೆ ಬೊಂಬೆ ತಯಾರಿಸುವುದು ರೇಜಿಗೆಯ ಕೆಲಸವಾಗಿದೆ. ಈ ಬೊಂಬೆ ತಯಾರಿಸುವ ಅನುಭವ ಮಕ್ಕಳ ಉತ್ಸಾಹವನ್ನು ಹೆಚ್ಚಿಸುತ್ತದೆ. ಸಣ್ಣ ಸಣ್ಣ ಗುಂಪುಗಳಲ್ಲಿ ಸ್ವತಂತ್ರವಾಗಿ ಅಥವಾ ಬೋಧಕರ ಮಾರ್ಗದರ್ಶನದ ಮೇರೆಗೆ ಬೊಂಬೆ ತಯಾರಿಸುವ ಚಟುವಟಿಕೆಯಲ್ಲಿ ತೊಡಗಿರಿ.
- ಔದಾರ್ಯದಿಂದ ನಡೆದುಕೊಳ್ಳಿ. ಬೊಂಬೆ ಮಾಡುವಾಗ ನಾವೀನ್ಯಪೂರ್ಣ ಪ್ರಯೋಗಗಳನ್ನು ಮಾಡಲು ಮಕ್ಕಳಿಗೆ ಅವಕಾಶ ನೀಡಿ.

**ಬೊಂಬೆ ಬಳಸಿ ತರಗತಿಯ ಒಂದು ಸಂವಾದ**

೧. ಬೊಂಬೆಯೇ ತರಗತಿ ತೆಗೆದುಕೊಳ್ಳುವಂತೆ ಮಾಡಿ. ಮಕ್ಕಳು ಇಂಗ್ಲೀಷಿನಲ್ಲಿ ಬೊಂಬೆಯನ್ನೇ ಪ್ರಶ್ನೆ ಕೇಳಲಿ. ಬೊಂಬೆಯೇ ಆ ಪ್ರಶ್ನೆಗಳಿಗೆ ಉತ್ತರಿಸಲಿ. ನೀವು ಪ್ರಶ್ನೆಗಳನ್ನು ಬೇಕಾದರೆ ಕಪ್ಪು ಹಲಗೆಯ ಮೇಲೆ ಬರೆಯಬಹುದು.

೨. ಒಂದೊಂದು ಮಗುವೂ ನೀಡಿರುವ ಸಾಮಗ್ರಿಗಳನ್ನು ಬಳಸಿಕೊಂಡು ೩೦ ನಿಮಿಷಗಳ ಅವಧಿಯೊಳಗೆ ಒಂದು ಸರಳವಾದ ಬೊಂಬೆ ಮಾಡಲಿ. ಮಕ್ಕಳು ಬೊಂಬೆ ಮಾಡುವಾಗ ಭಾಷೆ ಬಳಸುವ ಅವಕಾಶ ಸೃಷ್ಟಿಯಾಗುತ್ತದೆ. ಅದು ಬಹಳ ಒಳ್ಳೆಯದು. ಹುಷಾರಾಗಿ ಕತ್ತರಿಸಿ. ಇದು ತಲೆಯಾಗಬಹುದು. ಇವು ಕಾಲುಗಳೇ?

೩. ಮಕ್ಕಳು ಬೊಂಬೆ ಮಾಡಿ ಮುಗಿಸಿದ ಮೇಲೆ ಅದನ್ನು ಅವರು ಪರಸ್ಪರರಿಗೆ ತೋರಿಸಿಕೊಳ್ಳಲಿ, ಪರಸ್ಪರ ಮಾತಾಡಿಕೊಳ್ಳಲಿ.

೪. ಎಲ್ಲ ಬೊಂಬೆಗಳೂ ಸಿದ್ಧವಾದ ಮೇಲೆ ಮಕ್ಕಳಿಗೆ ವರ್ತುಲಾಕಾರದಲ್ಲಿ ಕೂರಲು ಹೇಳಿ. ಆ ವೃತ್ತಾಕಾರದಲ್ಲಿ ಮಗು ತನ್ನ ಪಕ್ಕದಲ್ಲಿ ಕುಳಿತಿರುವ ಮತ್ತೊಂದು ಮಗುವಿನೊಂದಿಗೆ ಬೊಂಬೆಯ ಮೂಲಕವೇ ಮಾತನಾಡಲಿ. ಸೂಕ್ತ ಶಬ್ದಗಳಿಗಾಗಿ ತಡವರಿಸಿದಾಗ ಅವರಿಗೆ ನೆರವಾಗಿ.

೫. ಒಂದು ಗುಂಪಿನ ಮಕ್ಕಳು ಮತ್ತೊಂದು ಗುಂಪಿನ ಮಕ್ಕಳೊಂದಿಗೆ ಮಾತನಾಡಲಿ. ನಾಲ್ಕು ಬೊಂಬೆಗಳ ಮಧ್ಯೆ ಮಾತುಕತೆ ನಡೆಯಲಿ.

೮. ಈಗ ಎಲ್ಲ ಮಕ್ಕಳೂ ಒಬ್ಬರು ಮತ್ತೊಬ್ಬರ ಬೊಂಬೆಯೊಂದಿಗೆ ಮಾತನಾಡುತ್ತಾ ತರಗತಿ ಕೋಣೆಯ ತುಂಬಾ ಓಡಾಡಲಿ.

೯. ಈಗ ಪ್ರತಿಯೊಂದು ಮಗುವೂ ಒಂದು ಚಿತ್ರ ರಚಿಸಬೇಕು ಮತ್ತು ತಮ್ಮ ಬೊಂಬೆಗಳ ಬಗ್ಗೆ ಬರೆಯಬೇಕು.

೧೦. ಹೀಗೆ ತಮ್ಮ ಬೊಂಬೆಯ ಪಾತ್ರವನ್ನು ನಿರ್ಣಯಿಸಿದ ಮೇಲೆ ಅವರು ಒಂದು ನಾಟಕವನ್ನು ಸೃಷ್ಟಿಸಿಕೊಳ್ಳಲಿ. ಕಥಾಹಂದರವನ್ನು ರಚಿಸಲು ಅವರಿಗೆ ಮಾರ್ಗದರ್ಶನ ಮಾಡಿ.

**ಪಕ್ಷಿ ಬೊಂಬೆ**

ಈ ಕೆಳಗಿನ ಪದ್ಯ ಪಾಠ ಮಾಡಲು ಪಕ್ಷಿ ಬೊಂಬೆಯನ್ನು ಬಳಸಬಹುದಾಗಿದೆ:

"ಎರಡು ಪುಟ್ಟ ಕಪ್ಪು ಹಕ್ಕಿಗಳು ಬೆಟ್ಟದ ಮೇಲೆ ಕುಳಿತಿದ್ದವು

ಒಂದರ ಹೆಸರು ಜಾಕ್ ಮತ್ತೊಂದರ ಹೆಸರು ಜಿಲ್

ಹಾರಿ ಹೋಗು ಜಾಕ್, ಹಾರಿ ಹೋಗು ಜಿಲ್

ಹಾರಿ ಹಿಂದಕ್ಕೆ ಬಾ ಜಾಕ್, ಹಾರಿ ಹಿಂದಕ್ಕೆ ಬಾ ಜಿಲ್

(ಸಾಂಪ್ರದಾಯಿಕ ಜಾನಪದ ಹಾಡು)

"Two little blackbirds sitting on a hill.

One named Jack and one named Jill

Fly away Jack, fly away Jill

Come back Jack, Come back Jill."

[Traditional folk song]

ಇದಕ್ಕಾಗಿ ನಿಮಗೆ ಎರಡು ಹಕ್ಕಿ ಬೊಂಬೆಗಳು ಬೇಕಾಗುತ್ತವೆ. ಒಂದೊಂದು ಕೈಗೆ ಒಂದೊಂದು. ಬೊಂಬೆಗಳನ್ನು ಬಚ್ಚಿಡುವ, ಎತ್ತಿ ತೋರಿಸುವ ಚಟುವಟಿಕೆ ನಡೆಸುತ್ತಲೇ ಪದ್ಯವನ್ನು ವಾಚಿಸಿ.

ವಿರುದ್ಧಪದಗಳನ್ನು ಬೋಧಿಸಲೂ ಸಹ ಈ ಪದ್ಯವನ್ನು ಸ್ವಲ್ಪ ಮಾರ್ಪಡಿಸಿ ಬಳಸಬಹುದು.

ಹಕ್ಕಿಗಳ ಹೆಸರುಗಳನ್ನು ಹಾಗು ಮೊದಲ ಸಾಲಿನ ಕೊನೆಯ ಪದವನ್ನು ಬದಲಾಯಿಸಿ, ಉದಾಹರಣೆಗೆ. ಒಂದು ಹಕ್ಕಿಗೆ ಕ್ವಯಟ್ ಎಂದೂ, ಮತ್ತೊಂದಕ್ಕೆ ಲೌಡ್ ಎಂದೂ ಹೆಸರಿಡಬಹುದು.

...cloud. One named Quiet and one named Loud.

...bell. Sick-Well,

...kite. Heavy-Light,

...park, Light-Dark,

...gate, Love -Hate

...bend, Start-End.

[*ಮೂಲದ ಉದಾಹರಣೆಯು ಇಂಗ್ಲೀಶಿನ ಶಿಶುಗೀತೆಯಾದ್ದರಿಂದ ಅದರ ಪ್ರಾಸಕ್ಕೆ ಹೊಂದಿಕೊಳ್ಳುವಂತೆ ಇಂಗ್ಲೀಶಿನ ವಿರುದ್ಧಪದಗಳನ್ನು ಜೋಡಿಸಲಾಗಿದೆ]

ಚಿತ್ರ: ಚುಂಚು, ರೆಕ್ಕೆಗಳು -ಕತ್ತರಿಸಿ 2, ದೇಹ -ಕತ್ತರಿಸಿ 2, ಮುಖ-ಕತ್ತರಿಸಿ 2, ಆನೆಯ ಕಿವಿಗಳು -ಕತ್ತರಿಸಿ 4, ಆನೆಯ ಸೊಂಡಿಲು-ಕತ್ತರಿಸಿ 2, ಮೊಲದ ಕಿವಿಗಳು -ಕತ್ತರಿಸಿ 2, ಬೆಕ್ಕಿನ ಕಿವಿಗಳು-ಕತ್ತರಿಸಿ 4

ಶ್ರೀಮತಿ ಪ್ರೇಮಾ ಡೇನಿಯಲ್ ಅವರು ಇಂದಿರಾ ಗಾಂಧೀ ರಾಷ್ಟ್ರೀಯ ಮುಕ್ತ ವಿಶ್ವವಿದ್ಯಾಲಯದ ಡಿಪ್ಲೋಮಾ ಇನ್ ಅರ್ಲಿ ಎಜುಕೇಷನ್‌ಗೆ ಮತ್ತು ಮಾರ್ಗದರ್ಶನಕ್ಕೆ ನೀಡಲಾಗುವ ಸರ್ಟಿಫಿಕೇಟ್ ಕೋರ್ಸ್‌ಗೆ ಶೈಕ್ಷಣಿಕ ಸಮಾಲೋಚಕರಾಗಿದ್ದಾರೆ. ಕಳೆದ ಐದು ವರ್ಷಗಳಿಂದ ಅವರು ತಮಿಳುನಾಡು ಮತ್ತು ದಕ್ಷಿಣ ಭಾರತದ ಇನ್ನಿತರ ಭಾಗಗಳಲ್ಲಿ ಪ್ರಾಥಮಿಕಪೂರ್ವ ತರಗತಿಯ ಅಧ್ಯಾಪಕರುಗಳಿಗೆ ಕಾರ್ಯಾಗಾರಗಳು, ವಿಚಾರ ಸಂಕಿರಣಗಳನ್ನು ಆಯೋಜಿಸುತ್ತಿದ್ದಾರೆ ಮತ್ತು ಇನ್ ಸರ್ವೀಸ್ ತರಬೇತಿ ಕೋರ್ಸುಗಳನ್ನು ನಡೆಸುತ್ತಿದ್ದಾರೆ. ಚೆನ್ನೈನ ಎಸ್‌ಸಿಎಸ್ ಕೋಠಾರಿ ಅಕಾಡೆಮಿಯಲ್ಲಿ ೧೮ ವರ್ಷಗಳ ಕಾಲ ಅವರು ಅರ್ಲಿ ಚೈಲ್ಡ್‌ಹುಡ್ ಎಜುಕೇಷನ್ ವಿಭಾಗದಲ್ಲಿ

ಸಂಯೋಜಕರಾಗಿದ್ದರು. ಅವರನ್ನು ಈ ಇಮೇಲ್ ಮೂಲಕ ಸಂಪರ್ಕಿಸಬಹುದು: ***premadnl@yahoo.co.in***

Bibliography

Neaum Sally, Tallack Jill, Good practices in implementing the pre – school curriculum, Stanley Thornes (publishers) Ltd. England.

Wright Andrew, Art and crafts with children. Resource books for teachers, Oxford University Press.

Das Ayesha, Pleasurable learning and teaching, National Education Group. Calcutta.

Rountree Barbara, etal, Creative Teaching with Puppets. USA